


# ಕರ್ನಾಟಕ ವಿಧಾನ ಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

## **ಚುಕ್ಕೆ ಗುರುತಿನ ಪ್ರಶ್ನೆ**

ದಿನಾಂಕ : 12-03-2021 ಪ್ರಶ್ನೆ ಸಂಖ್ಯೆ : 151 (1067)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಗೋವಿಂದ ರಾಜು (ವಿಧಾನ ಸಭೆಯಿಂದ ಚುನಾಯಿತರಾದವರು )

ಉತ್ತರ ನೀಡಬೇಕಾದ ದಿನಾಂಕ : 12-03-2021

ಉತ್ತರಿಸುವ ಸಚಿವರು : ಕೃಷಿ ಸಚಿವರು

ವಿಷಯ : ವ್ಯವಸಾಯಕ್ಕೆ ಯೋಗ್ಯವಾದ ಜಮೀನಿನ ಬಗ್ಗೆ

(ಅ) ಕೋಲಾರ ಜಿಲ್ಲೆಯಲ್ಲಿ ವ್ಯವಸಾಯಕ್ಕೆ ಯೋಗ್ಯವಾದ ಜಮೀನಿನ ವಿಸ್ತೀರ್ಣವೆಷ್ಟು; (ಹೆಕ್ಟೇರ್‌ವಾರು ಹಾಗೂ ತಾಲ್ಲೂಕುವಾರು ವಿವರ ನೀಡುವುದು)

(ಆ) ಈ ಜಮೀನಿನಲ್ಲಿ ನೀರಾವರಿಯಡಿಯಲ್ಲಿ ವ್ಯವಸಾಯ ಮಾಡುತ್ತಿರುವ ಜಮೀನಿನ ವಿಸ್ತೀರ್ಣವೆಷ್ಟು ಹಾಗೂ ಮಳೆ ಆಧಾರಿತ ವ್ಯವಸಾಯದ ಜಮೀನಿನ ವಿಸ್ತೀರ್ಣವೆಷ್ಟು; (ತಾಲ್ಲೂಕುವಾರು ಮಾಹಿತಿ ನೀಡುವುದು)

(ಇ) ಈ ಜಿಲ್ಲೆಯಲ್ಲಿ ಬೆಳೆಯುವ ಬೆಳೆಗಳ ಆಧಾರದಲ್ಲಿ ಇಲಾಖೆಗಳ ವಿಂಗಡಣೆ ಮಾಡಲಾಗಿದೆಯೇ;

(ಈ) ಹಾಗಿದ್ದಲ್ಲಿ, ಕೃಷಿ ಇಲಾಖೆಯ ವ್ಯಾಪ್ತಿಯಲ್ಲಿರುವ ಒಟ್ಟು ಜಮೀನಿನ ವಿಸ್ತೀರ್ಣವೆಷ್ಟು; (ವಿವರ ನೀಡುವುದು)

(ಉ) ಕಳೆದ ಎರಡು ವರ್ಷಗಳಲ್ಲಿ ಕೃಷಿ ಇಲಾಖೆಯಲ್ಲಿ ವಿತರಿಸಿರುವ ಬೆಳೆ ಪರಿಹಾರದ ಮೊತ್ತ ಹಾಗೂ ಸಬ್ಸಿಡಿ ಮೊತ್ತವೆಷ್ಟು; (ಸಂಪೂರ್ಣ ಮಾಹಿತಿ ನೀಡುವುದು)

(ಊ) ಕೃಷಿ ಇಲಾಖೆಯಲ್ಲಿ ಕೇವಲ ಪರಿಹಾರ ಮತ್ತು ಸಬ್ಸಿಡಿ ಮೊತ್ತ ವಿತರಿಸಲು ಮಾತ್ರ ಸೀಮಿತವಾಗಿರುವುದು ನಿಜವೇ;

(ಋ) ಉತ್ತಮ ಕೃಷಿ ವಿಜ್ಞಾನ ಅಧಿಕಾರಿಗಳನ್ನು ಹೊಂದಿರುವ ಇಲಾಖೆಯು ಮುಂದಿನ ದಿನಗಳಲ್ಲಿ ರೈತರಿಗೆ ಪ್ರಸಕ್ತ ಬೆಳೆಯ ಪದ್ಧತಿಗಳು ಹಾಗೂ ತಾಂತ್ರಿಕ ನೈಪುಣ್ಯತೆಯ ಬಗ್ಗೆ ವಿಶೇಷ ಕಾರ್ಯಕ್ರಮಗಳನ್ನು ರೂಪಿಸಲು ಕ್ರಮ ಕೈಗೊಳ್ಳುವುದೇ?